| | ಪ್ರಕರಣ | ವಿವರ | ಪದನಾಮ |
|---|---|---|---|
| 17 (1) (ಹೆಚ್) | ಸಾಮಾನ್ಯವಾಗಿ ನಗರದಲ್ಲೇ ವಾಸ ವಾಗಿರುವ ವ್ಯಕ್ತಿಗಳ ಪೈಕಿ ರಾಜ್ಯ ಸರ್ಕಾರದವರಿಂದ ನಾಮ ನಿರ್ದೇಶನ ಮಾಡಲ್ಪಟ್ಟ ಇಬ್ಬರು ವ್ಯಕ್ತಿಗಳು ಇರತಕ್ಕುದು; | **1)** ಶ್ರೀ ಎಸ್. ಚನ್ನಪ್ಪ, ಮೈಸೂರು ವಿಶ್ವ ವಿದ್ಯಾನಿಲಯ, ವಿಶ್ವಕೋಶದ ವಿಶ್ರಾಂತ ಸಂಪಾದಕರು ಹಾಗೂ ಹಿರಿಯ ಬರಹಗಾರರು ಅಧ್ಯಕ್ಷರು, ಶ್ರೀ ಕುವೆಂಪು ವಿಚಾರ ವೇದಿಕೆ, ಮೈಸೂರು, ನಂ. 642 (ಮಹಡಿ) 13 ನೇ ಮುಖ್ಯ ರಸ್ತೆ, 4ನೇ ಹಂತ, ಟಿ.ಕೆ. ಬಡಾವಣೆ, ಮೈಸೂರು–09<br>**2)** ಅಧ್ಯಕ್ಷರು, ರೋಟರಿ ಚಿಲ್ಡ್ರನ್ಸ್ ಅಸೋಸಿಯೇಷನ್ಸ್, ಮೈಸೂರು. | ಸದಸ್ಯರು<br>ಸದಸ್ಯರು |
| 17(2) | ನಗರದ ಮುಖ್ಯ ಪುಸ್ತಕ ಭಂಡಾರ ಅಧಿಕಾರಿಯು ನಗರದ ಪುಸ್ತಕ ಭಂಡಾರ ಪ್ರಾಧಿಕಾರ ವರ್ಗದ ಮತ್ತು ಸದರಿ ಪ್ರಾಧಿಕಾರ ವರ್ಗದ ಸಮಿತಿಗಳ ಅಧಿಕಾರ ಪ್ರಯುಕ್ತ ಕಾರ್ಯದರ್ಶಿ–ಯಾಗಿರತಕ್ಕುದು. | ಉಪ ನಿರ್ದೇಶಕರು<br>ನಗರ ಕೇಂದ್ರ ಗ್ರಂಥಾಲಯ<br>ಮೈಸೂರು | ಸದಸ್ಯರು ಹಾಗೂ ಪದನಿಮಿತ್ತ ಕಾರ್ಯದರ್ಶಿ |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಸ್.ಬಿ.ಪಟಗಾರ್**
ಸರ್ಕಾರದ ಅಧೀನ ಕಾರ್ಯದರ್ಶಿ(ಸಾಮಾನ್ಯ)
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಇಲಾಖೆ.

**ಪಿ.ಆರ್. 376**

## ಕಂದಾಯ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಆರ್‌ಡಿ 105 ಎಲ್‌ಆರ್‌ಎ 2009, ಬೆಂಗಳೂರು, ದಿನಾಂಕ: 25ನೇ ಮೇ, 2012.**

ಕರ್ನಾಟಕ ಭೂ ಸುಧಾರಣೆ ಅಧಿನಿಯಮ (1961)ದ ಕಲಂ 48ರ ಉಪ ಕಲಂ (1) ರಿಂದ (3) ರಲ್ಲಿ ಪ್ರದತ್ತವಾದ ಅಧಿಕಾರ ಚಲಾಯಿಸಿ ಈ ಕೆಳಕಂಡ ಭೂ ನ್ಯಾಯ ಮಂಡಳಿಗೆ ಈ ಹಿಂದೆ ಮಾಡಲಾದ ಅಧಿಕಾರೇತರ ಸದಸ್ಯರ ನಾಮ ನಿರ್ದೇಶನ ರದ್ದುಪಡಿಸಿ, ಅವರ ಬದಲಿಗೆ ಈ ಕೆಳಕಂಡ ವ್ಯಕ್ತಿಗಳನ್ನು ಅಧಿಕಾರೇತರ ಸದಸ್ಯರನ್ನಾಗಿ ಈ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನಾಮ ನಿರ್ದೇಶನ ಮಾಡಿ ಸದರಿ ಭೂ ನ್ಯಾಯ ಮಂಡಳಿಯನ್ನು ಪುನರ್‌ರಚಿಸಿ ಆದೇಶ ಹೊರಡಿಸಿದೆ.

**ಹಾಸನ ಜಿಲ್ಲೆ: ಸಕಲೇಶಪುರ ತಾಲ್ಲೂಕು ಭೂ ನ್ಯಾಯ ಮಂಡಳಿ**

| ಹೆಸರು ಮತ್ತು ವಿಳಾಸ | ವರ್ಗ |
|---|---|
| 1. ಶ್ರೀ ಹೆಚ್. ಆರ್. ರಾಮಚಂದ್ರ ಬಿನ್ ರಾಮೇಗೌಡ, ಹೆತ್ತೂರು ಗ್ರಾಮ ಮತ್ತು ಅಂಚೆ, ಸಕಲೇಶಪುರ ತಾಲ್ಲೂಕು. | ಸಾಮಾನ್ಯ |
| 2. ಶ್ರೀ ಶಾಂತಮಲ್ಲಪ್ಪ ಬಿನ್ ಸೋಮಪ್ಪ, ಕೌಕುಡಿ ಗ್ರಾಮ, ಹೊಸೂರು ಅಂಚೆ, ಯಸಳೂರು ಹೋಬಳಿ, ಸಕಲೇಶಪುರ ತಾಲ್ಲೂಕು. | ಸಾಮಾನ್ಯ |
| 3. ಶ್ರೀ ಗಂಗಾಧರ್ ಬಿನ್ ಧರಣಪ್ಪ, ಶಿವನಂಜಪ್ಪ ಬಿಲ್ಡಿಂಗ್, ಚಂಪಕನಗರ, ಸಕಲೇಶಪುರ. | ಸಾಮಾನ್ಯ |
| 4. ಶ್ರೀ ಹೆಚ್.ಕೆ. ಪ್ರೇಮಕುಮಾರ್ ಬಿನ್.ಕೆಂಚಯ್ಯ, ಬೆಳಗೋಡು ಗ್ರಾಮ ಮತ್ತು ಅಂಚೆ, ಸಕಲೇಶಪುರ ತಾಲ್ಲೂಕು. | ಪರಿಶಿಷ್ಟ ಜಾತಿ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಬಿ.ಎನ್. ಶ್ರೀನಿವಾಸ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ(ಭೂ ಸುಧಾರಣೆ).

**ಪಿ.ಆರ್. 416**

## HOME SECRETARIAT

### ORDER

### No. HD 128 SST 2012, Bangalore, Dated: 28th May, 2012

WHEREAS the Government of Karnataka having regard to the circumstances prevailing in the State is satisfied that it is necessary that all Commissioners of Police and all the District Magistrates to be empowered to exercise the powers under sub-section (2) of section 3 of the Karnataka Prevention of Dangerous Activities of Boot–leggers, Drug-Offenders, Gamblers, Goondas, Immoral Traffic Offenders and Slum-Grabbers Act, 1985 (Karnataka Act No. 12 of 1985).

Now, therefore in exercise of the powers conferred by Sub-Section (2) of Section 3 of the Karnataka Prevention of Dangerous Activities of Boot Leggers, Drug-Offenders, Gamblers, Goondas, Immoral Traffic Offenders and Slum-Grabbers Act, 1985 the Government of Karnataka hereby direct that all the Commissioners of Police and all the District Magistrates in the State shall exercise the powers conferred by sub-section (1) of Section 3 within the limits of their jurisdiction for a period of three months from 09-06-2012 to 08-09-2012.

By Order and in the Name of the Governor of Karnataka

**PRAKASH Y. K.**

Under Secretary to Government,

Home Department (Law and Order)

**P.R. 417**

## COMMERCE & INDUSTRIES SECRETARIAT

### NOTIFICATION

### No. CI 16 RIS 2012, Bangalore, Dated: 25th May, 2012

In exercise of the powers conferred under section 5(1) & 5(2) of the Right to Information Act, 2005 (Central Act 22 of 2005) and in partial modification of the Notification No. CI 37 RIS 2005, dt: 07-10-2005, vide Sl.No.11 viz., ``Small Scale Industries Section'', the following Public Information Officers/ Assistant Public Information Officers are appointed with immediate effect:

| SL. No. | SECTION | PUBLIC INFORMATION OFFICER | ASSISTANT PUBLIC INFORMATION OFFICER | APPELLATE AUTHORITY |
|---|---|---|---|---|
| 11 | Small Scale Industries | Under Secretary (SSI) | Desk Officer (SSI) | Joint Director (Technical Cell) |

By Order and in the Name of the Governor of Karnataka

**L.S.VASAN,**

Under Secretary to Government,

Commerce & Industries Department

(Services & Co-Ordination).

**P.R. 418**

## ನಗರಾಭಿವೃದ್ಧಿ ಸಚಿವಾಲಯ

### ತಿದ್ದುಪಡಿ

### ಸಂಖ್ಯೆ: ನಅಇ 125 ಎಂಎಲ್‌ಆರ್ 2008 (A–24)(ಭಾಗ–II) ಬೆಂಗಳೂರು, ದಿನಾಂಕ: 4ನೇ ಮೇ, 2012.

ಸರ್ಕಾರದ ಅಧಿಸೂಚನೆ ಸಂಖ್ಯೆ : ನಅಇ 125 ಎಂಎಲ್‌ಆರ್ 2008 (A–24)(ಭಾಗ–II) ದಿನಾಂಕ 03–05–2012ರಂದು ಹೊರಡಿಸಿರುವ ಅಧಿಸೂಚನೆಯ 2ನೇ ಸಾಲಿನಲ್ಲಿರುವ ದಿನಾಂಕ: 19–02–2012ನ್ನು ದಿನಾಂಕ 19–02–2009 ಎಂದು ತಿದ್ದುಪಡಿ ಮಾಡಿಕೊಂಡು ಓದಿಕೊಳ್ಳತಕ್ಕದ್ದು. ಇನ್ನುಳಿದಂತೆ ಯಾವುದೇ ಬದಲಾವಣೆ ಇರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ವಿ.ರಾಮಪ್ಪ,**

ಸರ್ಕಾರದ ಅಧೀನ ಕಾರ್ಯದರ್ಶಿ,

ನಗರಾಭಿವೃದ್ಧಿ ಇಲಾಖೆ.

**ಪಿ.ಆರ್. 419**

## ಸಹಕಾರ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಿಓ 10 ಸಿಎಸ್ಎಸ್ 2012, ಬೆಂಗಳೂರು, ದಿನಾಂಕ: 15ನೇ ಮೇ, 2012.**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ 11)ರ ಪ್ರಕರಣ 29ರ ಉಪ ಪ್ರಕರಣ(1)ರ ಮೇರೆಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು "ಶ್ರೀ ಅಣ್ಣಾಸಾಹೇಬ ದೇವಪ್ಪಾ, ಖೇಮಲಾಪೂರೆ, ನಡಗುಂದಿ ಗ್ರಾಮ, ಬೆಳಗಾವಿ ತಾಲ್ಲೂಕು ಮತ್ತು ಜಿಲ್ಲೆ ಇವರನ್ನು ಘಟಪ್ರಭಾ ಯೋಜನಾ ಮಟ್ಟದ ನೀರು ಬಳಕೆದಾರರ ಸಹಕಾರಿ ಸಂಘಗಳ ಮಹಾಮಂಡಳ ನಿ., ಹಿಡಕಲ್ ಡ್ಯಾಂ, ಹುಕ್ಕೇರಿ ತಾಲ್ಲೂಕು, ಬೆಳಗಾವಿ ಜಿಲ್ಲೆ ಇದರ ಆಡಳಿತ ಮಂಡಳಿಗೆ ಸದಸ್ಯರನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ನಾಮನಿರ್ದೇಶನ ಮಾಡುತ್ತದೆ. ಹೀಗೆ ನಾಮನಿರ್ದೇಶನಗೊಂಡ ಸದಸ್ಯರ ಪದಾವಧಿಯು ಚುನಾಯಿತ ಸಮಿತಿಯ ಪದಾವಧಿಯ ಮುಕ್ತಾಯವಾಗುವವರೆಗೆ ಅಥವಾ ಸರ್ಕಾರದ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಜಾರಿಯಲ್ಲಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಸಿ.ಸತೀಶ್,**

ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ,

**ಪಿ.ಆರ್. 420** ಸರ್ಕಾರದ ಉಪ ಕಾರ್ಯದರ್ಶಿ, ಸಹಕಾರ ಇಲಾಖೆ.

## ಸಹಕಾರ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಇ 113 ಎಂಆರ್ಇ(1) 2012, ಬೆಂಗಳೂರು, ದಿನಾಂಕ: 23ನೇ ಮೇ, 2012.**

ಸರ್ಕಾರದ ಅಧಿಸೂಚನೆ ಸಂಖ್ಯೆ : ಸಇ 331 ಎಂಆರ್ಇ(3) 2008 ದಿನಾಂಕ: 31–07–2010 ರಲ್ಲಿ ಬಾಗಲಕೋಟೆ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯ ಅಧ್ಯಕ್ಷರನ್ನಾಗಿ ಶ್ರೀ. ಪ್ರಭುಸ್ವಾಮಿ ಸರಗಣಾಚಾರಿ ಮತ್ತು ಉಪಾಧ್ಯಕ್ಷರನ್ನಾಗಿ ಶ್ರೀ ಎಸ್.ಎಂ. ಹರಗಬಲ್ ಇವರುಗಳನ್ನು ನಾಮ ನಿರ್ದೇಶನ ಮಾಡಿರುವುದನ್ನು ದಿನಾಂಕ: 31–07–2012 ವರೆಗೆ ಮುಂದುವರೆಸಲಾಗಿದೆ

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ.ಕೆ. ವಾಸುದೇವ ಮೂರ್ತಿ,**

**ಪಿ.ಆರ್. 421** ಸರ್ಕಾರದ ಅಧೀನ ಕಾರ್ಯದರ್ಶಿ, ಸಹಕಾರ ಇಲಾಖೆ.

## ಸಹಕಾರ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಇ 113 ಎಂಆರ್ಇ(2) 2012, ಬೆಂಗಳೂರು, ದಿನಾಂಕ: 23ನೇ ಮೇ, 2012.**

ಸರ್ಕಾರದ ಅಧಿಸೂಚನೆ ಸಂಖ್ಯೆ : ಸಇ 331 ಎಂಆರ್ಇ(2) 2008 ದಿನಾಂಕ: 31–07–2010 ರಲ್ಲಿ ಬೀಳಗಿ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯ ಅಧ್ಯಕ್ಷರನ್ನಾಗಿ ಶ್ರೀ. ಕೃಷ್ಣಗೌಡ ವೆಂಕನಗೌಡ ಪಾಟೀಲ್ ಮತ್ತು ಉಪಾಧ್ಯಕ್ಷರನ್ನಾಗಿ ಶ್ರೀ ಅನಿಲ್ ಕುಮಾರ್ ಕೇಶವರಾವ್ ದೇಶಪಾಂಡೆ ಇವರುಗಳನ್ನು ನಾಮ ನಿರ್ದೇಶನ ಮಾಡಿರುವುದನ್ನು ದಿನಾಂಕ: 31–07–2012 ವರೆಗೆ ಮುಂದುವರೆಸಲಾಗಿದೆ

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ.ಕೆ. ವಾಸುದೇವಮೂರ್ತಿ,**

**ಪಿ.ಆರ್. 422** ಸರ್ಕಾರದ ಅಧೀನ ಕಾರ್ಯದರ್ಶಿ, ಸಹಕಾರ ಇಲಾಖೆ.

## ಸಹಕಾರ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಇ 114 ಎಂಆರ್ಇ 2012, ಬೆಂಗಳೂರು, ದಿನಾಂಕ: 29ನೇ ಮೇ, 2012.**

ಶ್ರೀ. ಸಿ. ಗುರುಸ್ವಾಮಿ, ಕೊಂಗರಹಳ್ಳಿ ಇವರನ್ನು ಕೊಳ್ಳೇಗಾಲ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯಲ್ಲಿ ಕೃಷಿ ಸಂಸ್ಕರಣ ಸಹಕಾರ ಸಂಘ ಕ್ಷೇತ್ರದ ವತಿಯಿಂದ ಖಾಲಿ ಇರುವ ಸದಸ್ಯ ಸ್ಥಾನಕ್ಕೆ ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ, 1966 ರ ಕಲಂ 18(2)ರನ್ವಯ ಕೊಳ್ಳೇಗಾಲ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ ಸದಸ್ಯರನ್ನಾಗಿ ನಾಮನಿರ್ದೇಶನ ಮಾಡಿ ಆದೇಶ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ.ಕೆ. ವಾಸುದೇವಮೂರ್ತಿ,**

**ಪಿ.ಆರ್. 423** ಸರ್ಕಾರದ ಅಧೀನ ಕಾರ್ಯದರ್ಶಿ–1, ಸಹಕಾರ ಇಲಾಖೆ.

## ಆರ್ಥಿಕ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಆಇ 484 ವೆಚ್ಚ –12/12 ಬೆಂಗಳೂರು, ದಿನಾಂಕ: 01ನೇ ಜೂನ್, 2012.**

ಪ್ರವಾಸೋದ್ಯಮ ಇಲಾಖೆಯ ಯೋಜನೆಗಳ ಗ್ಲೋಬಲ್ ಇನ್‌ವೆಸ್ಟ್‌ಮೆಂಟ್ ಮೀಟ್–2012ರಲ್ಲಿ ಕೆ.ಐ.ಪಿ.ಡಿ.ಸಿ ಸಂಸ್ಥೆಯನ್ನು Transaction Advisor ಆಗಿ ನೇಮಿಸಲು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ–1999ರ ಕಲಂ 4(ಜಿ) ರಡಿ ಪ್ರದತ್ತವಾದ ಅಧಿಕಾರ ಚಲಾಯಿಸಿ, ಪ್ರವಾಸೋದ್ಯಮ ಇಲಾಖೆಗೆ ಪಾರದರ್ಶಕತೆ ಕಾಯ್ದೆಯಿಂದ ವಿನಾಯಿತಿ ನೀಡಿದೆ.

ಉತ್ತಮ ಗುಣಮಟ್ಟದ ಸೇವೆಯನ್ನು ಸಮಂಜಸ ದರದಲ್ಲಿ ಸಂಗ್ರಹಿಸುವುದನ್ನು ಪ್ರವಾಸೋದ್ಯಮ ಇಲಾಖೆಯು ದೃಢಪಡಿಸಿಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕಾಂತ.ಎಸ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಸಂಗ್ರಹಣಾ ಕೋಶ).

**ಪಿ.ಆರ್. 424**

## ಆರ್ಥಿಕ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಆಇ 485 ವೆಚ್ಚ –12/12 ಬೆಂಗಳೂರು, ದಿನಾಂಕ: 02ನೇ ಜೂನ್, 2012.**

ಸಾಮಾಜಿಕ, ಆರ್ಥಿಕ ಮತ್ತು ಜಾತಿಗಣತಿ –2011 ರ ಕರಡು ಗಣತಿ ಅಂಕಿ ಅಂಶಗಳ ಪಟ್ಟಿ ಹಾಗೂ ಅಂತಿಮ ಗಣತಿ ಅಂಕಿ ಅಂಶಗಳ ಪಟ್ಟಿಗಳ ಮುದ್ರಣ ಕಾರ್ಯವನ್ನು 2008ನೇ ಚುನಾವಣಾ ಅವಧಿಯಲ್ಲಿ ರಾಜ್ಯ ಮುಖ್ಯ ಚುನಾವಣಾಧಿಕಾರಿಗಳು ಮತದಾರರ ಪಟ್ಟಿಯನ್ನು ಮುದ್ರಿಸಲು ನಿಗಧಿಪಡಿಸಿದ್ದ ದರದಲ್ಲಿ ಮತ್ತು ಅವರು ವಿವಿಧ ಜಿಲ್ಲೆಗಳಲ್ಲಿ ಗುರುತಿಸಿದ್ದ ಮುದ್ರಣಕಾರರಿಂದ, ಈ ಗಣತಿಯ ಅಂಕಿ ಅಂಶಗಳ ಪಟ್ಟಿಯ ಮುದ್ರಣ ಕಾರ್ಯಕೈಗೊಳ್ಳಲು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ–1999ರ ಕಲಂ 4(ಜಿ) ರಡಿ ಪ್ರದತ್ತವಾದ ಅಧಿಕಾರ ಚಲಾಯಿಸಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಗೆ ಪಾರದರ್ಶಕತೆ ಕಾಯ್ದೆಯಿಂದ ವಿನಾಯಿತಿ ನೀಡಿದೆ.

ಉತ್ತಮ ಗುಣಮಟ್ಟದ ಸೇವೆಯನ್ನು ಸಮಂಜಸ ದರದಲ್ಲಿ ಸಂಗ್ರಹಿಸುವುದನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯು ದೃಢಪಡಿಸಿಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕಾಂತ.ಎಸ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಸಂಗ್ರಹಣಾ ಕೋಶ).

**ಪಿ.ಆರ್. 425**

## ಆರ್ಥಿಕ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಆಇ 533 ವೆಚ್ಚ –12/12 ಬೆಂಗಳೂರು, ದಿನಾಂಕ: 02ನೇ ಜೂನ್, 2012.**

ಜಿಮ್ 2012 ನ್ನು ಜೂನ್ 06–08 ರಂದು ಆಯೋಜಿಸಲು ಈ ಕೆಳಕಂಡ ಕಾರ್ಯಗಳನ್ನು ಎಂ.ಸಿ.ಅಂಡ್‌ಎ, ಸಂಸ್ಥೆಗೆ ನೇರವಾಗಿ ವಹಿಸಲು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ–1999ರ ಕಲಂ 4(ಜಿ) ರಡಿ ಪ್ರದತ್ತವಾದ ಅಧಿಕಾರ ಚಲಾಯಿಸಿ, ಮೂಲ ಸೌಲಭ್ಯ ಅಭಿವೃದ್ಧಿ ಇಲಾಖೆಗೆ ಪಾರದರ್ಶಕತೆ ಕಾಯ್ದೆಯಿಂದ ವಿನಾಯಿತಿ ನೀಡಿದೆ.

1. ಪ್ರಮುಖ ದಿನಪತ್ರಿಕೆಯಲ್ಲಿ Registration of Interest (ROI) ಜಾಹಿರಾತನ್ನು ರೂ.7,30,701/– ಗಳ ವೆಚ್ಚದಲ್ಲಿ ನೀಡುವುದು.
2. ಜಿಮ್ ಎಕ್ಸ್‌ಪೋದಲ್ಲಿ ರೂ 6,00,000/– ವೆಚ್ಚದಲ್ಲಿ ಮಳಿಗೆ ಸ್ಥಾಪಿಸುವುದು ಮತ್ತು
3. ಇಲಾಖೆಯಲ್ಲಿ ಬಂಡವಾಳ ಹೂಡಿಕೆಗೆ ಇರುವ ಅವಕಾಶಗಳ ಬಗ್ಗೆ ಪ್ರಮುಖ ದಿನಪತ್ರಿಕೆಯಲ್ಲಿ ರೂ.3,25,042/– ವೆಚ್ಚದಲ್ಲಿ ಜಾಹೀರಾತು ನೀಡುವುದು.

ಉತ್ತಮ ಗುಣಮಟ್ಟದ ಸೇವೆಯನ್ನು ಸಮಂಜಸದರದಲ್ಲಿ ಸಂಗ್ರಹಿಸುವುದನ್ನು ಮೂಲ ಸೌಲಭ್ಯ ಅಭಿವೃದ್ಧಿ ಇಲಾಖೆಯು ದೃಢಪಡಿಸಿಕೊಳ್ಳಬೇಕು ಎಂ.ಸಿ. ಅಂಡ್ ಎ. ಸಂಸ್ಥೆಯು ಈ ಕಾರ್ಯಗಳನ್ನು ಬೇರೆಯವರಿಗೆ ವಹಿಸುವುದಾದರೆ ಕೆ.ಟಿ.ಪಿ.ಪಿ ಅಧಿನಿಯಮ/ನಿಯಮಗಳನ್ನು ಪಾಲಿಸಬೇಕು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕಾಂತ.ಎಸ್,**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರ್ಥಿಕ ಇಲಾಖೆ (ಸಂಗ್ರಹಣಾ ಕೋಶ).

**ಪಿ.ಆರ್. 426**

## HOME SECRETARIAT

### NOTIFICATION

### NO. HD 04 PCE 2012, Bangalore, Dated: 1st June, 2012.

Whereas in exercise of the powers conferred by sub section (1) of Section 3 of the Commission of Inquiry Act, 1952 (Central Act LX of 1952) the Government of Karnataka appointed a One-man Commission of Inquiry headed by Hon`ble Justice R.G.Vaidyanatha, Former Judge of Karnataka and Bombay High Court for a period of three months to inquire into the incidents that occurred on Friday, the 2nd March 2012, resulting in extensive violence, burning of private and public vehicles physical violence between media persons and some Advocates followed by police lathi-charge and bursting of teargas shells in the premises of the City Civil Court Complex, Bangalore.

Whereas the term of the Commission will expire on 09-06-2012,

And now, Whereas, on the request of the Commission of Inquiry vide their letter bearing No. RGVC 65/2012 dated: 15-05-2012. The matter has been examined and in exercise of the powers conferred in it, the Government of Karnataka are pleased to extend the term of the Commission for a further period of six months from 10-06-2012 up to 09-12-2012.

By Order and in the Name of the Governor of Karnataka

**PRAKASH.Y.K.**

Under Secretary to Government ,

Home Department (Law & Order).

**P.R.428**

## ಕಂದಾಯ ಸಚಿವಾಲಯ

### ಅಧಿಸೂಚನೆ

### ಸಂಖ್ಯೆ: ಕಂಇ 52 ಮುಆಬಿ 2012, ಬೆಂಗಳೂರು, ದಿನಾಂಕ: 26ನೇ ಮೇ, 2012.

ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಅಧಿನಿಯಮ (1997)ರ ಕಲಂ 23(ಎ)ರ ಅಡಿ ಪ್ರದತ್ತವಾದ ಅಧಿಕಾರ ಚಲಾಯಿಸಿ ಬೆಳಗಾವಿ ಜಿಲ್ಲೆ, ಸವದತ್ತಿ ತಾಲ್ಲೂಕು, ಶಿರಸಂಗಿ ಶ್ರೀ ಕಾಳಿಕಾದೇವಿ ದೇವಸ್ಥಾನವನ್ನು ಅಧಿಸೂಚಿತ ಧಾರ್ಮಿಕ ಸಂಸ್ಥೆಗಳ ಪಟ್ಟಿಗೆ ಸೇರಿಸಲು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ. ನಾರಾಯಣಪ್ಪ,**

ಪೀಠಾಧಿಕಾರಿ,

ಕಂದಾಯ ಇಲಾಖೆ (ಮುಜರಾಯಿ).

**ಪಿ.ಆರ್. 429**

## ಆರ್ಥಿಕ ಸಚಿವಾಲಯ

### ತಿದ್ದುಪಡಿ

### ಸಂಖ್ಯೆ: ಆಇ 478 ವೆಚ್ಚ –12/12 ಬೆಂಗಳೂರು, ದಿನಾಂಕ: 04ನೇ ಜೂನ್, 2012.

ಈ ಹಿಂದೆ ದಿನಾಂಕ: 22–05–2012 ರಲ್ಲಿ ಹೊರಡಿಸಲಾಗಿದ್ದ ಅಧಿಸೂಚನೆ ಸಂ: ಆಇ 478 ವೆಚ್ಚ–12/12ನ್ನು ಈ ಕೆಳಕಂಡಂತೆ ತಿದ್ದುಪಡಿ ಮಾಡಲಾಗಿದ್ದು, ಅದರಂತೆ ಓದಿಕೊಳ್ಳಲು ಕೋರಲಾಗಿದೆ.

"ರಾಜ್ಯ ಸರ್ಕಾರದ ಆಸ್ತಿ ಮತ್ತು ಹಣಕಾಸು ನಿರ್ವಹಣೆಗಾಗಿ ಮಹಾಲೇಖಪಾಲರ ಕಛೇರಿಯ ನಿವೃತ್ತ ಹಿರಿಯ ಲೆಕ್ಕಾಧಿಕಾರಿಗಳಾದ ಶ್ರೀ ಟಿ.ಎನ್. ನಾಗರಾಜನ್, ಇವರ ಸೇವೆಯನ್ನು ಮಾಸಿಕ ₹.30,000/– ಗಳ ಸಮಾಲೋಚನಾ ಶುಲ್ಕವಾಗಿ ಮತ್ತು ಶ್ರೀ ಸಿ.ಎಂ.ರಘೋತ್ತಮ್, ನಿವೃತ್ತ ಹಿರಿಯ ಲೆಕ್ಕಾಧಿಕಾರಿಗಳು, ಇವರ ಸೇವೆಯನ್ನು ಮಾಸಿಕ ₹.25,000/– ಗಳ ಸಮಾಲೋಚನಾ ಶುಲ್ಕವಾಗಿ ಹಾಗೂ ಶ್ರೀ ಕೆ.ವಿ.ವೆಂಕಟೇಶ್, ನಿವೃತ್ತ ಜಿಲ್ಲಾ ಖಜಾನೆ ಅಧಿಕಾರಿ, ಇವರ ಸೇವೆಯನ್ನು ಮಾಸಿಕ ₹.25,000/– ಗಳ ಸಮಾಲೋಚನಾ ಶುಲ್ಕವಾಗಿ ನಿಗಧಿಪಡಿಸಿ, ಇವರುಗಳನ್ನು ದಿನಾಂಕ: 01–04–2012 ರಿಂದ 6 ತಿಂಗಳ ಅವಧಿಗೆ ಸಮಾಲೋಚಕರನ್ನಾಗಿ ನೇಮಿಸಿಕೊಳ್ಳಲು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ–1999ರ ಕಲಂ 4(ಜಿ) ರಡಿ ಪ್ರದತ್ತವಾದ ಅಧಿಕಾರ ಚಲಾಯಿಸಿ, ಆರ್ಥಿಕ ಇಲಾಖೆಗೆ ಪಾರದರ್ಶಕತೆ ಕಾಯ್ದೆಯಿಂದ ವಿನಾಯಿತಿ ನೀಡಿದೆ "

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕಾಂತ.ಎಸ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಸಂಗ್ರಹಣಾ ಕೋಶ).

**ಪಿ.ಆರ್. 430**

## ಆರ್ಥಿಕ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಆಇ 454 ವೆಚ್ಚ –12/12 ಬೆಂಗಳೂರು, ದಿನಾಂಕ: 04ನೇ ಜೂನ್, 2012.**

ದಾವಣಗೆರೆ ವಿಶ್ವವಿದ್ಯಾನಿಲಯದ ಘಟಿಕೋತ್ಸವ ಮತ್ತು ಸಿಂಡಿಕೇಟ್ ಸಭಾಂಗಣಕ್ಕೆ ₹.25.00 ಲಕ್ಷಗಳಲ್ಲಿ ಬೀಟೆ ನಿರ್ಮಿತ ಪೀಠೋಪಕರಣಗಳನ್ನು ಸರ್ಕಾರದ ಅಧೀನ ಸಂಸ್ಥೆಯಾದ ಮೆ: ಕಾವೇರಿ ಎಂಪೋರಿಯಂ, ಮೈಸೂರು, ಇವರಿಂದ ನೇರವಾಗಿ ಖರೀದಿಸಲು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ–1999ರ ಕಲಂ 4(ಜಿ) ರಡಿ ಪ್ರದತ್ತವಾದ ಅಧಿಕಾರ ಚಲಾಯಿಸಿ, ಶಿಕ್ಷಣ ಇಲಾಖೆಗೆ ಪಾರದರ್ಶಕತೆ ಕಾಯ್ದೆಯಿಂದ ವಿನಾಯಿತಿ ನೀಡಿದೆ.

ಉತ್ತಮ ಗುಣಮಟ್ಟದ ಪೀಠೋಪಕರಣಗಳನ್ನು ಸಮಂಜಸದರದಲ್ಲಿ ಸಂಗ್ರಹಿಸುವುದನ್ನು ಶಿಕ್ಷಣ ಇಲಾಖೆಯು ದೃಢಪಡಿಸಿಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕಾಂತ.ಎಸ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಸಂಗ್ರಹಣಾ ಕೋಶ).

**ಪಿ.ಆರ್. 431**

## ಆರ್ಥಿಕ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಆಇ 504 ವೆಚ್ಚ –12/12 ಬೆಂಗಳೂರು, ದಿನಾಂಕ: 04ನೇ ಜೂನ್, 2012.**

``Augmenting Private Sector Capacity to undertake PPP Projects " in the identified areas of the Infrastructure Sector ಬಗ್ಗೆ ಅಧ್ಯಯನ ಮತ್ತು ವರದಿ ತಯಾರಿಸುವ ಕಾರ್ಯವನ್ನು ಫೆಡರೇಷನ್ ಆಫ್ ಇಂಡಿಯನ್ ಛೇಂಬರ್ಸ್ ಆಫ್ ಕಾಮರ್ಸ್ ಅಂಡ್ ಇಂಡಸ್ಟ್ರೀಸ್ (FICCI) ಸಂಸ್ಥೆಗೆ ₹.25.00 ಲಕ್ಷಗಳ ವೆಚ್ಚದಲ್ಲಿ ನೇರವಾಗಿ ವಹಿಸಲು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ–1999ರ ಕಲಂ 4(ಜಿ) ರಡಿ ಪ್ರದತ್ತವಾದ ಅಧಿಕಾರ ಚಲಾಯಿಸಿ, ಮೂಲಸೌಲಭ್ಯ ಅಭಿವೃದ್ಧಿ ಇಲಾಖೆಗೆ ಪಾರದರ್ಶಕತೆ ಕಾಯ್ದೆಯಿಂದ ವಿನಾಯಿತಿ ನೀಡಿದೆ.

ಉತ್ತಮ ಗುಣಮಟ್ಟದ ಸೇವೆಯನ್ನು ಸಮಂಜಸದರದಲ್ಲಿ ಸಂಗ್ರಹಿಸುವುದನ್ನು ಮೂಲಸೌಲಭ್ಯ ಅಭಿವೃದ್ಧಿ ಇಲಾಖೆಯು ದೃಢಪಡಿಸಿಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕಾಂತ.ಎಸ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಸಂಗ್ರಹಣಾ ಕೋಶ).

**ಪಿ.ಆರ್. 432**

## ಆರ್ಥಿಕ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಆಇ 449 ವೆಚ್ಚ –12/12 ಬೆಂಗಳೂರು, ದಿನಾಂಕ: 04ನೇ ಜೂನ್, 2012.**

ರಾಜ್ಯ ಉಚ್ಛ ನ್ಯಾಯಾಲಯದಲ್ಲಿ ಬಾಡಿಗೆ ಆಧಾರದ ಮೇಲೆ M/s Matrix Security and Surveillance Pvt. Ltd., ಸಂಸ್ಥೆಯ ಮುಖಾಂತರ ಅಳವಡಿಸಿರುವ CCTV ಗಳ ಕಾಲಾವಧಿಯನ್ನು ದಿನಾಂಕ: 01–04–2012 ರಿಂದ 30–06–2012ರವರೆಗೆ ವಿಸ್ತರಿಸಲು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ–1999ರ ಕಲಂ 4(ಜಿ) ರಡಿ ಪ್ರದತ್ತವಾದ ಅಧಿಕಾರ ಚಲಾಯಿಸಿ, ಒಳಾಡಳಿತ ಇಲಾಖೆಗೆ ಪಾರದರ್ಶಕತೆ ಕಾಯ್ದೆಯಿಂದ ವಿನಾಯಿತಿ ನೀಡಿದೆ.

ಉತ್ತಮ ಗುಣಮಟ್ಟದ ಸೇವೆಯನ್ನು ಸಮಂಜಸ ದರದಲ್ಲಿ ಸಂಗ್ರಹಿಸುವುದನ್ನು ಒಳಾಡಳಿತ ಇಲಾಖೆಯು ದೃಢಪಡಿಸಿಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕಾಂತ.ಎಸ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಸಂಗ್ರಹಣಾ ಕೋಶ).

**ಪಿ.ಆರ್. 433**

## ಆರ್ಥಿಕ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಆಇ 470 ವೆಚ್ಚ –12/12 ಬೆಂಗಳೂರು, ದಿನಾಂಕ: 05ನೇ ಜೂನ್, 2012.**

ಸುವರ್ಣ ಆರೋಗ್ಯ ಸುರಕ್ಷಾಟ್ರಸ್ಟ್‌ನ ಐ.ಟಿ ವೇದಿಕೆಗೆ ಸಂಬಂಧಿಸಿದ D.R.ಸೈಟ್‌ಸೌಲಭ್ಯವನ್ನು STPI ಸಂಸ್ಥೆಯ ಮುಖಾಂತರ ರೂ.12,36,350/–ಗಳ ವೆಚ್ಚದಲ್ಲಿ ಸ್ಥಾಪಿಸಲು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ–1999ರ ಕಲಂ 4(ಜಿ) ರಡಿ ಪ್ರದತ್ತವಾದ ಅಧಿಕಾರ ಚಲಾಯಿಸಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಗೆ ಪಾರದರ್ಶಕತೆ ಕಾಯ್ದೆಯಿಂದ ವಿನಾಯಿತಿ ನೀಡಿದೆ.

ಉತ್ತಮ ಗುಣಮಟ್ಟದ ಸೇವೆಯನ್ನು ಸಮಂಜಸ ದರದಲ್ಲಿ ಸಂಗ್ರಹಿಸುವುದನ್ನು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯು ದೃಢಪಡಿಸಿಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕಾಂತ.ಎಸ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಸಂಗ್ರಹಣಾ ಕೋಶ).

**ಪಿ.ಆರ್. 434**

## ಆರ್ಥಿಕ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಆಇ 456 ವೆಚ್ಚ –12/12 ಬೆಂಗಳೂರು, ದಿನಾಂಕ: 05ನೇ ಜೂನ್, 2012.**

ಬೆಂಗಳೂರು ಜಿಲ್ಲಾಧಿಕಾರಿಗಳ ಕಛೇರಿಯ ವ್ಯಾಪ್ತಿಯಲ್ಲಿರುವ ಕಂದಾಯ ಭವನ ಕಟ್ಟಡದಲ್ಲಿನ ಬೆಂಗಳೂರು ಉತ್ತರ ಹಾಗೂ ದಕ್ಷಿಣ ತಾಲ್ಲೂಕಿನ ತಹಶೀಲ್ದಾರ್‌ರವರ ಕಛೇರಿಯ ಒಳವಿನ್ಯಾಸ, ಪೀಠೋಪಕರಣ ಹಾಗೂ ವಿದ್ಯುದ್ಧೀಕರಣ ಕಾಮಗಾರಿಗಳನ್ನು ₹.89.14 ಲಕ್ಷಗಳ ಅಂದಾಜು ವೆಚ್ಚದಲ್ಲಿ ನೇರವಾಗಿ ಬೆಂಗಳೂರು ನಿರ್ಮಿತಿ ಕೇಂದ್ರ (ನಗರ)ಕ್ಕೆ ವಹಿಸಲು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ–1999ರ ಕಲಂ 4(ಜಿ) ರಡಿ ಪ್ರದತ್ತವಾದ ಅಧಿಕಾರ ಚಲಾಯಿಸಿ, ಕಂದಾಯ ಇಲಾಖೆಗೆ ಪಾರದರ್ಶಕತೆ ಕಾಯ್ದೆಯಿಂದ ವಿನಾಯಿತಿ ನೀಡಿದೆ.

ನಿರ್ಮಿತಿ ಕೇಂದ್ರವು ಈ ಕಾಮಗಾರಿಗಳನ್ನು ಬೇರೆಯವರಿಂದ ಮಾಡಿಸುವುದಾದಲ್ಲಿ ಕೆ.ಟಿ.ಪಿ.ಪಿ ಅಧಿನಿಯಮ/ನಿಯಮಗಳನ್ನು ಪಾಲಿಸಬೇಕು. ಉತ್ತಮ ಗುಣಮಟ್ಟದ ಕಾಮಗಾರಿಗಳನ್ನು ಸಮಂಜಸ ದರದಲ್ಲಿ ಸಂಗ್ರಹಿಸುವುದನ್ನು ಕಂದಾಯ ಇಲಾಖೆಯು ದೃಢಪಡಿಸಿಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕಾಂತ.ಎಸ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಸಂಗ್ರಹಣಾ ಕೋಶ).

**ಪಿ.ಆರ್. 435**

## ನಗರಾಭಿವೃದ್ಧಿ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ನಅಇ 68 ಬೆಮಪ್ರಾ 2012, ಬೆಂಗಳೂರು, ದಿನಾಂಕ: 18ನೇ ಮೇ, 2012.**

ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಕಲಂ 5 ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಬಿಜಾಪುರ ಜಿಲ್ಲೆ ತಾಳಿಕೋಟೆ ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶಕ್ಕೆ ಹಾಲಿ ಭೂ ಉಪಯೋಗವನ್ನು ಗುರುತಿಸಲು ದಿನಾಂಕ: 31–03–2012 ರಿಂದ ಜಾರಿಗೆ ಬರುವಂತೆ ನಿರ್ಧರಿಸಿ ಕಾರ್ಯನಿರ್ವಹಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ.ಎಂ. ವಾಸುದೇವ ರಾವ್,**
ಸರ್ಕಾರದ ಅಧೀನ ಕಾರ್ಯದರ್ಶಿಗಳು,
ನಗರಾಭಿವೃದ್ಧಿ ಇಲಾಖೆ.

**ಪಿ.ಆರ್. 436**

## FOREST, ENVIRONMENT AND ECOLOGY SECRETARIAT

### NOTIFICATION

**NO. FEE 36 EPC 2010, Bangalore, Dated: 04th June, 2012.**

In continuation to Government Notification No. FEE 36 EPC 2010, dated 02-07-2011 and in exercise of powers conferred under Section 28 of the Water (Prevention & Control of Pollution) Act, 1974 & Under Section 31 of the Air (Prevention & Control of Pollution) Act, 1981, Government hereby extends the term of office of Mr. Justice A.M. Farooq, Retired Judge of High Court of Karnataka, as Chairman, Karnataka State Appellate Authority, Bangalore by one year with effect from 01-07-2012.

The terms & conditions shall remain the same as per Government Order No. FEE 97 EPC 2006, Dt: 23-7-2008.

By Order and in the Name of the Governor of Karnataka,
**G.H.ANASUYAMMA,**
Under Secretary to Government,
(Environment and Ecology)
Forest, Environment and Ecology Department.

**P.R.438**

## ಕಂದಾಯ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಕಂಇ 50 ಮುಆಬಿ 2011, ಬೆಂಗಳೂರು, ದಿನಾಂಕ: 30ನೇ ಮೇ, 2012.**

ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಅಧಿನಿಯಮ (1997)ರ ಕಲಂ 23(ಎ)ರ ಅಡಿ ಪ್ರದತ್ತವಾದ ಅಧಿಕಾರ ಚಲಾಯಿಸಿ ಬೆಂಗಳೂರು ದಕ್ಷಿಣ ತಾಲ್ಲೂಕು, ಕೆಂಗೇರಿ ಹೋಬಳಿ, ದೀವಟಿಗೆ ರಾಮನಹಳ್ಳಿ ಗ್ರಾಮದ ಶ್ರೀ ಹನುಮಂತ ದೇವರ ದೇವಾಲಯವನ್ನು ಅಧಿಸೂಚಿತ ಧಾರ್ಮಿಕ ಸಂಸ್ಥೆಗಳ ಪಟ್ಟಿಗೆ ಸೇರಿಸಲು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ.ಉಮಾಪತಿ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಮುಜರಾಯಿ).

**ಪಿ.ಆರ್. 439**

## ನಗರಾಭಿವೃದ್ಧಿ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ನಅಇ 18 ಗುಅಪ್ರಾ 2012, ಬೆಂಗಳೂರು, ದಿನಾಂಕ: 08ನೇ ಮೇ, 2012.**

ಕರ್ನಾಟಕ ನಗರಾಭಿವೃದ್ಧಿ ಪ್ರಾಧಿಕಾರ ಕಾಯ್ದೆ 1987ರ ಪ್ರಕರಣ 3(3)(ಎಂ) ಹಾಗೂ (4) ರಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕ್ರಮವಾಗಿ ಈ ಕೆಳಕಂಡವರನ್ನು ಗುಲ್ಬರ್ಗಾ ನಗರಾಭಿವೃದ್ಧಿ ಪ್ರಾಧಿಕಾರದ ಸದಸ್ಯರನ್ನಾಗಿ ಸರ್ಕಾರದ ಇಚ್ಛಾನುಸಾರ ಅಥವಾ ಮೂರು ವರ್ಷದ ಅವಧಿಯವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ತಕ್ಷಣದಿಂದ ಜಾರಿಗೆ ಬರುವಂತೆ ನಾಮ ನಿರ್ದೇಶನ ಮಾಡಿ ಆದೇಶಿಸಿದೆ.

| ಕ್ರ.ಸಂ. | ಹೆಸರು ಮತ್ತು ಗ್ರಾಮ | ಹುದ್ದೆ |
|---|---|---|
| 1 | ಶ್ರೀ ಶಿವಯೋಗಿ ಶಿವಲಿಂಗಪ್ಪಾ, ನಾಗನಹಳ್ಳಿ, ಮನೆ ನಂ.116, ರೈಲ್ವೇ ನಿಲ್ದಾಣ ಎದುರುಗಡೆ, ತಾರಾಫೈಲ್, ಗುಲ್ಬರ್ಗಾ – 585 102. | ಸದಸ್ಯರು (ಎಸ್.ಸಿ) |
| 2 | ಶ್ರೀ ಲಿಂಗಣ್ಣ ಸಂಗಪ್ಪ ಮಳ್ಳಿ, ಗುಲ್ಬರ್ಗಾ. | ಸದಸ್ಯರು |
| 3 | ಶ್ರೀ ಸಿದ್ದಾಜಿ ಶ್ರೀಮಂತರಾವ ಪಾಟೀಲ, ಮನೆ ನಂ.8–1304/17ಎ, ಗಾಂಧಿನಗರ, ಹುಮನಾಬಾದ್ ರಸ್ತೆ, ಗುಲ್ಬರ್ಗಾ – 585 104. | ಸದಸ್ಯರು |
| 4 | ಶ್ರೀಮತಿ ನಳಿನಿ ಪ್ರಭುಲಿಂಗ ಮಹಗಾಂವ್ಕರ್, ಜನತಾ ಲೇಔಟ್, ಗುಲ್ಬರ್ಗಾ. | ಸದಸ್ಯರು (ಮಹಿಳೆ) |
| 5 | ಶ್ರೀ ಲಿಂಗಣ್ಣ, ಸಂಗಪ್ಪ ಮಳ್ಳಿ, ಶಹಬಜಾರ್, ಗುಲ್ಬರ್ಗಾ. | ಆರ್ಕಿಟೆಕ್ಟ್ |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ.ಎಂ. ವಾಸುದೇವ ರಾವ್,**
ಸರ್ಕಾರದ ಅಧೀನ ಕಾರ್ಯದರ್ಶಿಗಳು,
ನಗರಾಭಿವೃದ್ಧಿ ಇಲಾಖೆ.

**ಪಿ.ಆರ್. 442**

## ಕಂದಾಯ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಕಂಇ 55 ಮುಆಬಿ 2012, ಬೆಂಗಳೂರು, ದಿನಾಂಕ: 1–6–2012.**

ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಅಧಿನಿಯಮ (1997)ರ ಕಲಂ 23ರ ಅಡಿ ಪ್ರದತ್ತವಾದ ಅಧಿಕಾರ ಚಲಾಯಿಸಿ ಉತ್ತರ ಕನ್ನಡ ಜಿಲ್ಲೆ, ಹಳಿಯಾಳದಲ್ಲಿರುವ ಶ್ರೀ ತುಳಜಾ ಭವಾನಿ ದೇವಾಲಯವನ್ನು ಸದರಿ ಅಧಿನಿಯಮದ ಕಲಂ 35(1) ರ ಮೇರೆಗೆ ಅಧಿಸೂಚಿತ ಸಂಸ್ಥೆಗಳ ಪಟ್ಟಿಯಿಂದ ತೆಗೆದುಹಾಕಲು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ. ನಾರಾಯಣಪ್ಪ**
ಪೀಠಾಧಿಕಾರಿ,
ಕಂದಾಯ ಇಲಾಖೆ (ಮುಜರಾಯಿ).

**ಪಿ.ಆರ್. 440**

## ಸಹಕಾರ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ. ಸಇ 137 ಎಂಆರ್ಇ 2012, ಬೆಂಗಳೂರು, ದಿನಾಂಕ: 6ನೇ ಜೂನ್, 2012.**

ಶ್ರೀ ಜಿ.ಆಯ್. ಅಂಗಡಿ, ಇವರ ರಾಜೀನಾಮೆಯಿಂದ ತೆರವಾದ ಸ್ಥಾನಕ್ಕೆ ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ, 1966 ರ ಕಲಂ 11(1) (ix) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ವಿಶ್ವನಾಥ ನಾಗಪ್ಪ ಅಥಣಿ ಇವರನ್ನು ಬಾಗಲಕೋಟೆ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಸದ್ಯದ ಸಮಿತಿಯ ಅವಧಿಗೆ ಸದಸ್ಯರನ್ನಾಗಿ ನಾಮ ನಿರ್ದೇಶನ ಮಾಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಸಿ.ಕೆ. ವಾಸುದೇವ ಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ–1,
ಸಹಕಾರ ಇಲಾಖೆ.

**ಪಿ.ಆರ್. 457**

## KARNATAKA GOVERNOR'S SECRETARIAT

### NOTIFICATION

**No. GS 31 BUM 2011, Bangalore, dated : 13th June 2012.**

Whereas an Inquiry has been ordered to probe into certain allegations of large scale malpractices in the examinations conducted at the Distance Education Centres and the matters relating to Kolar P.G. Centre and certain other matters of Bangalore University, vide Notification No. GS 31 BUM 2011, dated 24th December 2011, under section 8(1) of the Karnataka State Universities Act, 2000.

Whereas, Justice Shri K. Shivashankar Bhat, retired Judge, High Court of Karnataka has been appointed as Commission of Inquiry to inquire into the complaints.

Whereas, the Inquiry Commission has been requested to submit the report of Inquiry within 6 (six) months from the date of the notification.

Whereas, Justice Shri K. Shivashankar Bhat has sought extension of time till 16th July 2012, for finalizing the inquiry report.

AND NOW, THEREFORE, I H.R. Bhardwaj, Governor of Karnataka and Chancellor of the Universities in Karnataka, hereby extend the term of the Inquiry Commission till 20th July 2012. The other terms of reference stipulated in Notification dated 24th December 2012 shall remain unaltered.

**H.R. BHARDWAJ**
Governor of Karnataka &
Chancellor of Universities
**R. KALPANA**
Under Secretary to Governor

**P.R. 456**

## ಕನ್ನಡ, ಸಂಸ್ಕೃತಿ ಹಾಗೂ ವಾರ್ತಾ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ.: ಕಸಂವಾಪ್ರ 106 ಕೆಎಂಯು 2012, ಬೆಂಗಳೂರು, ದಿನಾಂಕ : 21–5–2012**

ಸಹ್ಯಾದ್ರಿ ಪರಂಪರೆ ಅಭಿವೃದ್ಧಿ ಪ್ರಾಧಿಕಾರ ಅಧಿನಿಯಮ, 2011 (2012 ರ ಕರ್ನಾಟಕ ಅಧಿನಿಯಮ ಸಂಖ್ಯೆ : 21) ರ 1ನೇ ಪ್ರಕರಣ (2)ನೇ ಉಪ ಪ್ರಕರಣದಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ರಾಜ್ಯ ಸರ್ಕಾರವು ತಕ್ಷಣದಿಂದ ಜಾರಿಗೆ ಬರುವಂತೆ ಸದರಿ ಅಧಿನಿಯಮದ ಉಪಬಂಧಗಳು ಜಾರಿಗೆ ಬರುವ ದಿನಾಂಕವೆಂದು ಈ ಮೂಲಕ ಗೊತ್ತುಪಡಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎನ್. ಗೀತಾಕುಮಾರಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ, ಸಂಸ್ಕೃತಿ ಹಾಗೂ ವಾರ್ತಾ ಇಲಾಖೆ, (ಆಡಳಿತ ಶಾಖೆ).

**ಪಿ.ಆರ್. 458**

## ನಗರಾಭಿವೃದ್ಧಿ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ : ನಅಇ 125 ಎಂಎಲ್ಆರ್ 2008 (C–8)(ಭಾಗ–1), ಬೆಂಗಳೂರು, ದಿನಾಂಕ : 11–6–2012**

ಅಧಿಸೂಚನೆ ಸಂಖ್ಯೆ : ನಅಇ 125 ಎಂಎಲ್ಆರ್ 2008 (ಸಿ–8) ದಿನಾಂಕ : 25–2–2009ರಲ್ಲಿ ಹಿರೇಕೆರೂರು ಪಟ್ಟಣ ಪಂಚಾಯತಿಗೆ ನಾಮನಿರ್ದೇಶನ ಮಾಡಿರುವ ಆದೇಶವನ್ನು ರದ್ದುಪಡಿಸಿ, ಕರ್ನಾಟಕ ಪುರಸಭೆ ಕಾಯ್ದೆ 1964ರ ಪ್ರಕರಣ 352(1ಬಿ) ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಈ ಕೆಳಕಂಡವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಹಿರೇಕೆರೂರು ಪಟ್ಟಣ ಪಂಚಾಯಿತಿಗೆ ಸದಸ್ಯರನ್ನಾಗಿ ಸರ್ಕಾರವು ನಾಮ ನಿರ್ದೇಶನ ಮಾಡಿದೆ.

1. ಶ್ರೀ ಉಳವಿಗೌಡ ಸಿ. ವೀರನಗೌಡ್ರ, ಅಜಾದ ನಗರ, ಹಿರೇಕೆರೂರು.
2. ಶ್ರೀ ನವೀನ ಶಿವಾನಂದಪ್ಪಾ ಕಣವಿ, ಹಿರೇಕೆರೂರು ಮುಖ್ಯ ರಸ್ತೆ, ಹಿರೇಕೆರೂರು.
3. ಶ್ರೀ ಉಮೇಶ ಶಿವಮೂರ್ತೆಪ್ಪ ಬಣಕಾರ, ರಾಘವೇಂದ್ರ ಕಾಲೋನಿ, ಹಿರೇಕೆರೂರು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ.ವಿ. ರಾಮಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ನಗರಾಭಿವೃದ್ಧಿ ಇಲಾಖೆ.

**ಪಿ.ಆರ್. 459**

## ಜಲಸಂಪನ್ಮೂಲ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸನೀಇ 13 ಅಜಅ 2011, ಬೆಂಗಳೂರು, ದಿನಾಂಕ : 13–6–2012**

ರಾಜ್ಯ ಅಂತರ್ಜಲ ಅಭಿವೃದ್ಧಿ ಪಡಿಸುವ ಮತ್ತು ಅಂತರ್ಜಲದ ಅತಿ ಬಳಕೆ ನಿಯಂತ್ರಣ ಮಾಡುವ ಸಲುವಾಗಿ ಕರ್ನಾಟಕ ಅಂತರ್ಜಲ (ಅಭಿವೃದ್ಧಿ ಮತ್ತು ನಿರ್ವಹಣೆಯ ವಿನಿಯಮನ ಹಾಗೂ ನಿಯಂತ್ರಣ) ಅಧಿನಿಯಮ 2011 (2011ರ ಕರ್ನಾಟಕ ಅಧಿನಿಯಮ ಸಂಖ್ಯೆ : 25) ರ 1ನೇ ಪ್ರಕರಣ (3)ನೇ ಉಪಪ್ರಕರಣದಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ರಾಜ್ಯ ಸರ್ಕಾರವು ಈ ಅಧಿನಿಯಮವನ್ನು ದಿನಾಂಕ : 20–6–2011 ರಿಂದ ಇಡೀ ಕರ್ನಾಟಕ ರಾಜ್ಯಕ್ಕೆ ಅನ್ವಯಿಸುವಂತೆ ಜಾರಿಗೆ ತರಲಾಗಿದೆ. ಸದರಿ ಅಧಿನಿಯಮದ ನಿಯಮ (5) ರನ್ವಯ ದಿನಾಂಕ : 16–3–2012 ರಂದು ಕರ್ನಾಟಕ ಅಂತರ್ಜಲ ಪ್ರಾಧಿಕಾರವನ್ನು ರಚಿಸಲಾಗಿದೆ.

ಮೇಲ್ಕಂಡ ಪ್ರಾಧಿಕಾರದ ದಿನಾಂಕ : 5–5–2012 ರಂದು ನಡೆದ ಮೊದಲನೇ ಸಭೆಯಲ್ಲಿ ಕೈಗೊಂಡ ನಿರ್ಣಯದಂತೆ ಅಂತರ್ಜಲ ಮಟ್ಟದ ಕುಸಿತ ಮತ್ತು ಅತಿಬಳಕೆ ನಿಯಂತ್ರಿಸಲು ಕರ್ನಾಟಕ ಅಂತರ್ಜಲ (ಅಭಿವೃದ್ಧಿ ಮತ್ತು ನಿರ್ವಹಣೆಯ ವಿನಿಯಮನ ಹಾಗೂ ನಿಯಂತ್ರಣ) ಅಧಿನಿಯಮ 2011 ಮತ್ತು ನಿಯಮಾವಳಿ 2012ನ್ನು ಈಗಾಗಲೇ ರಚಿಸಲಾಗಿರುವ ನಿಯಮಗಳನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಜಿಲ್ಲಾ ಮಟ್ಟದ ಸಮಿತಿಯನ್ನು ರಚಿಸುವ ಅಗತ್ಯತೆಯನ್ನು ಮನಗಂಡು ರಾಜ್ಯದಲ್ಲಿನ ಆಯಾ ಜಿಲ್ಲೆಯ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಈ ಕೆಳಕಂಡ ಸದಸ್ಯರೊಂದಿಗೆ ಜಿಲ್ಲಾ ಮಟ್ಟದ ಸಮಿತಿಯನ್ನು ರಚಿಸಿದೆ.

| | | |
|---|---|---|
| 1. | ಜಿಲ್ಲೆಯ ಜಿಲ್ಲಾಧಿಕಾರಿ | ಅಧ್ಯಕ್ಷರು |
| 2. | ಮುಖ್ಯ ಕಾರ್ಯನಿರ್ವಹಣಾಧಿಕಾರಿ, ಜಿಲ್ಲಾ ಪಂಚಾಯತ್ | ಉಪಾಧ್ಯಕ್ಷರು |
| 3. | ಕಾರ್ಯಪಾಲಕ ಇಂಜಿನಿಯರ್, ಸಣ್ಣ ನೀರಾವರಿ ಇಲಾಖೆ | ಸದಸ್ಯ ಕಾರ್ಯದರ್ಶಿ |
| 4. | ಜಿಲ್ಲಾ ಪೊಲೀಸ್ ಅಧೀಕ್ಷಕರು | ಸದಸ್ಯರು |
| 5. | ಉಪ ನಿರ್ದೇಶಕರು/ಹಿರಿಯ ಭೂವಿಜ್ಞಾನಿ, ಗಣಿ ಮತ್ತು ಭೂವಿಜ್ಞಾನ ಇಲಾಖೆ | ಸದಸ್ಯರು |
| 6. | ಕಾರ್ಯಪಾಲಕ ಇಂಜಿನಿಯರ್, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ಇಲಾಖೆ | ಸದಸ್ಯರು |
| 7. | ಕಾರ್ಯಪಾಲಕ ಇಂಜಿನಿಯರ್, ಕರ್ನಾಟಕ ವಿದ್ಯುತ್ ಪ್ರಸರಣ ಕಂಪನಿ ನಿಯಮಿತ | ಸದಸ್ಯರು |
| 8. | ಪರಿಸರ ಅಧಿಕಾರಿಗಳು, ಕರ್ನಾಟಕ ಮಾಲಿನ್ಯ ನಿಯಂತ್ರಣಾ ಮಂಡಳಿ | ಸದಸ್ಯರು |

ಕರ್ನಾಟಕ ಅಂತರ್ಜಲ (ಅಭಿವೃದ್ಧಿ ಮತ್ತು ನಿರ್ವಹಣೆಯ ವಿನಿಯಮನ ಹಾಗೂ ನಿಯಂತ್ರಣ) ಅಧಿನಿಯಮ 2011ನ್ನು ಚಾಚುತಪ್ಪದೇ ಅನುಷ್ಠಾನಗೊಳಿಸುವ ನಿಟ್ಟಿನಲ್ಲಿ ಸಮಿತಿಯ ಸದಸ್ಯ ಕಾರ್ಯದರ್ಶಿಯು ಕರ್ನಾಟಕ ಅಂತರ್ಜಲ (ಅಭಿವೃದ್ಧಿ ಮತ್ತು ನಿರ್ವಹಣೆಯ ವಿನಿಯಮನ ಹಾಗೂ ನಿಯಂತ್ರಣ) ನಿಯಮಾವಳಿ 2012ರ ನಿಯಮ 6, 7 ಮತ್ತು 8ನ್ನು ಅನುಷ್ಠಾನಗೊಳಿಸುವ ಸಂಬಂಧ ನಿಗದಿತ ಅರ್ಜಿಗಳನ್ನು ಸ್ವೀಕರಿಸಿ ಪರಿಶೀಲಿಸುವುದು ಹಾಗೂ ಉಪ ನಿರ್ದೇಶಕರು/ಹಿರಿಯ ಭೂವಿಜ್ಞಾನಿ, ಗಣಿ ಮತ್ತು ಭೂವಿಜ್ಞಾನ ಇಲಾಖೆ ಇವರುಗಳು ಸಲ್ಲಿಸಲ್ಪಟ್ಟ ಸೂಕ್ತ ತಾಂತ್ರಿಕ ವರದಿಯೊಂದಿಗೆ ಪ್ರಸ್ತಾವನೆಗಳನ್ನು ಸಮಿತಿಯ ಮುಂದಿಟ್ಟು, ಅನುಮೋದನೆ ಪಡೆಯತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ.ಸಿ. ಸಿದ್ದಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ).

**ಪಿ.ಆರ್. 460**